CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೮, ೨೦೦೪ (ಪುಷ್ಯ ೧೮, ಶಕ ವರ್ಷ ೧೯೨೫) | ಸಂಚಿಕೆ ೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಪರಿಸರ ಸಂರಕ್ಷಣೆ ಕಾಯ್ದೆ 1986ರ ರಡಿ ಸಾರ್ವಜನಿಕ ವಿಚಾರಣೆ ನಡೆಸಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ:**
1. ಪರಿಸರ (ಸಂರಕ್ಷಣೆ) ಕಾಯ್ದೆ 1986.
2. ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್ಒ 60 (ಇ) ದಿನಾಂಕ: 27.1.94
3. ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್ಒ 318 (ಇ) ದಿನಾಂಕ: 10.4.97
4. ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್ಒ 319 (ಇ) ದಿನಾಂಕ: 10.4.97
5. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 273 ಇಎನ್‌ವಿ 97, ದಿನಾಂಕ: 27.2.98, 7.3.98 ಮತ್ತು 23.4.98

**ಪ್ರಸ್ತಾವನೆ:**

ಭಾರತ ಸರ್ಕಾರದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಪರಿಸರ (ಸಂರಕ್ಷಣೆ) ಕಾಯ್ದೆ 1986 ರಡಿ ಹೊರಡಿಸಲಾಗಿರುವ ಕ್ರಮಾಂಕ (2)ರಿಂದ (4)ರ ಮೇಲಿನ ಅಧಿಸೂಚನೆಗಳಡಿ ಸರ್ಕಾರವು ಎಲ್ಲಾ ಜಿಲ್ಲೆಗಳಲ್ಲೂ ಜಿಲ್ಲಾಮಟ್ಟದ ಸಾರ್ವಜನಿಕ ವಿಚಾರಣಾ ಸಮಿತಿಯನ್ನು ಕ್ರಮಾಂಕ (5) ರ ಸರ್ಕಾರಿ ಆದೇಶಗಳಲ್ಲಿ ರಚಿಸಿರುತ್ತದೆ.

ನಿಗದಿತ ಯೋಜನೆಗಳಿಗೆ ಹಾಗೂ ಅವುಗಳ ಸ್ಥಾಪನೆಯಿಂದ ಪರಿಸರದ ಮೇಲುಂಟಾಗುವ ಅಧಿಕ ಹಾನಿ ಅಥವಾ/ ಹಾಗೂ ಜನರ ಸ್ಥಳ ನಿಯೋಜನೆ ಉಂಟು ಮಾಡುವಂತಹ ಕೈಗಾರಿಕೆಗಳಿಗೆ ಸಾರ್ವಜನಿಕ ವಿಚಾರಣೆಯು ಕಡ್ಡಾಯವಾಗಿರುತ್ತದೆ. ಸರ್ಕಾರೇತರ ಸಂಸ್ಥೆಗಳು ಹಾಗೂ ಸಾರ್ವಜನಿಕರು ತಮ್ಮ ಧ್ವನಿ: ಸಲಹೆಗಳು: ಆಸಕ್ತಿ : ಆಕ್ಷೇಪಣೆಗಳನ್ನು ಉದ್ಯಮದಾರರಿಗೆ ಹಾಗೂ ಯೋಜನೆಯನ್ನು ಚುಕ್ತಗೊಳಿಸುವ ಪ್ರಾಧಿಕಾರಕ್ಕೆ ವ್ಯಕ್ತಪಡಿಸಲು ಸಾರ್ವಜನಿಕ ವಿಚಾರಣೆಯು ಒಂದು ವೇದಿಕೆಯನ್ನು ಒದಗಿಸಿಕೊಡುತ್ತದೆ. ಇದರಿಂದ ಸಾರ್ವಜನಿಕ ವಿಚಾರಣೆಯು ಸದಸ್ಯರ ಕ್ರಿಯಾತ್ಮಕ, ವಿವೇಚನಾಯುಕ್ತ ಭಾಗವಹಿಸುವಿಕೆಗೆ ಹಾಗೂ ಸಮಾಜದ ಎಲ್ಲಾ ರಂಗದ ಜನತೆಯ ಭಾಗವಹಿಸುವಿಕೆಗೆ ಅಗತ್ಯವಾಗಿರುತ್ತದೆ. ಆದ್ದರಿಂದ ಸರ್ಕಾರವು ಜಿಲ್ಲಾಮಟ್ಟದ ಸಾರ್ವಜನಿಕ ಸಮಿತಿಯನ್ನು ಪುನರ್‌ರಚಿಸಲು ಇಚ್ಛಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 47 ಇಎನ್‌ವಿ 2000, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಎಲ್ಲಾ ಜಿಲ್ಲೆಗಳಲ್ಲೂ ಜಿಲ್ಲಾ ಮಟ್ಟದ ಸಾರ್ವಜನಿಕ ವಿಚಾರಣಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ಕೆಳಕಂಡಂತೆ ಪುನರ್ ರಚಿಸಿದೆ.

| | | |
|---|---|---|
| 1. | ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಸದಸ್ಯ ಕಾರ್ಯದರ್ಶಿ, ಕ.ರಾ.ಮಾ.ನಿ.ಮಂ. | ಸದಸ್ಯರು/ ಸಮಾವೇಶಕರು |
| 3. | ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಪ್ರತಿನಿಧಿ | ಸದಸ್ಯರು |
| 4. | ಜಿಲ್ಲೆಯ ಜಿಲ್ಲಾ ಕೈಗಾರಿಕೆ ಉಪ ನಿರ್ದೇಶಕರು/ ಸಹ ನಿರ್ದೇಶಕರು | ಸದಸ್ಯರು |

| | | |
|---|---|---|
| 5. | ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಪ್ರತಿನಿಧಿ | ಸದಸ್ಯರು |
| 6. | ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯರು |
| 7. | ಸಂಬಂಧಿಸಿದ ಜಿಲ್ಲೆಯ ಎಕ್ಸಿಕ್ಯೂಟಿವ್ ಇಂಜಿನಿಯರ್/ ಸೂಪರಿಂಟೆಂಡಿಂಗ್ ಎಂಜಿನಿಯರ್ -ಮೇಜರ್ ಇರಿಗೇಷನ್ ಅಥವಾ ಮೈನರ್ ಇರಿಗೇಷನ್ (ಸಂದರ್ಭಾನುಸಾರವಾಗಿ) | ಸದಸ್ಯರು |
| 8. | ಸ್ಥಳೀಯ ಸಂಸ್ಥೆಗಳಿಂದ (ಮುನಿಸಿಪಾಲಿಟಿ/ ಪಂಚಾಯತ್) 3ಕ್ಕೂ ಮೀರದ ಪ್ರತಿನಿಧಿಗಳು | ಸದಸ್ಯರು |
| 9. | ಸಂಬಂಧಿಸಿದ ಜಿಲ್ಲೆಯಿಂದ ಜಿಲ್ಲಾಧಿಕಾರಿಗಳು ಹೆಸರಿಸುವ 3 ಹಿರಿಯ ನಾಗರೀಕ ಪ್ರತಿನಿಧಿಗಳು | ಸದಸ್ಯರು |

ಮೇಲ್ಕಾಣಿಸಿದ 8 ಮತ್ತು 9 ರ ನಾಮ ನಿರ್ದೇಶನಗಳನ್ನು ಜಿಲ್ಲಾಧಿಕಾರಿಯವರು ಸಂಬಂಧಪಟ್ಟ ಜಿಲ್ಲಾ ಉಸ್ತುವಾರಿ ಸಚಿವರ ಅನುಮೋದನೆ ಪಡೆದು ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಕಳುಹಿಸಿಕೊಡತಕ್ಕದ್ದು.

ಮೇಲೆ ಓದಲಾದ ಕ್ರಮಾಂಕ (5)ರ ಸರ್ಕಾರಿ ಆದೇಶ ಈ ಆದೇಶ ಹೊರಡಿಸಿದ ದಿನಾಂಕದಿಂದ ರದ್ದುಗೊಂಡಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1540

**ವಿ. ಆರ್. ಗಾಯ್ಕವಾಡ್**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಅಮಾನತ್ತಿನಿಂದ ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್ನೇಮಕ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶಗಳು ಸಂಖ್ಯೆ: ವಾಕೈ 40 ಕೈಸೇವಿ 2002, ದಿನಾಂಕ: 9.1.2003 ಮತ್ತು 23.1.2003

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶ ದಿನಾಂಕ: 9.1.2003ರಲ್ಲಿ, ಸರ್ಕಾರವು, ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಅವರ ವಿರುದ್ಧ ಸರ್ಕಾರದ ವಸತಿ ಗೃಹವನ್ನು ಅನಧಿಕೃತವಾಗಿ ಉಪಬಾಡಿಗೆಗೆ ಪಡೆದಿದ್ದಾರೆಂಬ ಆರೋಪದ ಮೇರೆಗೆ ಶಿಸ್ತು ಕ್ರಮ ಬಾಕಿಯಿಟ್ಟು, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಅಮಾನತ್ತಿನಲ್ಲಿಟ್ಟು ಆರು ತಿಂಗಳುಗಳಿಗೂ ಮೇಲ್ಪಟ್ಟಿರುವುದರಿಂದ ಪ್ರಕರಣವನ್ನು ಪುನರ್‌ಪರಿಶೀಲಿಸಿದ ಸರ್ಕಾರವು ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಬಾಕಿಯಿಟ್ಟು ಅಮಾನತ್ತನ್ನು ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್ನೇಮಕ ಮಾಡಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 92 ಕೈಸೇವಿ 2002, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ, ಸರ್ಕಾರವು, ಕರ್ನಾಟಕ ಸರ್ಕಾರಿ ಸೇವಾ (ಸಿಸಿ ಮತ್ತು ಎ) ನಿಯಮಾವಳಿ-1957ರ ನಿಯಮ 10ರ ಉಪನಿಯಮ 5 (ಸಿ)ಯಲ್ಲಿ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ, ಶ್ರೀಮತಿ ನಿಶಾತ್ ಅಯೇಷಾ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರ ವಿರುದ್ಧ ಶಿಸ್ತು ಕ್ರಮಗಳನ್ನು ಬಾಕಿಯಿಟ್ಟು, ತಕ್ಷಣದಿಂದಲೇ ಜಾರಿಗೆ ಬರುವಂತೆ ಅಮಾನತ್ತನ್ನು ಹಿಂತೆಗೆದುಕೊಂಡು ಕೆಲಸದ ಮೇಲೆ ಪುನರ್ನೇಮಕ ಮಾಡಿಕೊಳ್ಳಲಾಗಿದೆ ಮತ್ತು ಇವರನ್ನು ಖಾಲಿಯಿರುವ ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಪಂಚಾಯತ್, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿಗೆ ಮುಂದಿನ ಆದೇಶವಾಗುವವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ. ಆರ್. 1543

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ರಾಜ್ಯದ ಹತ್ತು ಅಕಾಡೆಮಿಗಳ ಸಾಮಾನ್ಯ ಅಂಗರಚನೆ ರಚಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 161 ಎಂಎಸ್ಎ 77, ದಿ: 3-11-80.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 38 ಎಂಎಸ್ಎ 77, ದಿ: 1-6-77.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 36 ಎಂಎಸ್ಎ 76, ದಿ: 2-11-77.
4. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 19 ಕರಅ 94, ದಿ: 20-4-94.
5. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ರವರ ಪತ್ರ ಸಂಖ್ಯೆ: ಕಸನಿ: 9: ಅಕಾಡೆಮಿ: 2003-04, ದಿ: 30-7-03, ಹಾಗೂ 20-08-2003.

**ಪ್ರಸ್ತಾವನೆ:**

ಮೇಲೆ ಓದಲಾದ ವಿವಿಧ ಆದೇಶಗಳನ್ವಯ ರಾಜ್ಯದ ಹತ್ತು ಅಕಾಡೆಮಿಗಳನ್ನು ರಚಿಸಲು ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದೊಡನೆ ಕಾರ್ಯನಿರ್ವಹಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: 5ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರು ರಾಜ್ಯದಲ್ಲಿ ಹತ್ತು ಅಕಾಡೆಮಿಗಳನ್ನು ಸ್ಥಾಪಿಸಿದ್ದು ಪ್ರತಿಯೊಂದು ಅಕಾಡೆಮಿಗೂ ಪ್ರತ್ಯೇಕವಾಗಿ ನಿಯಮಾವಳಿಯನ್ನು ರಚಿಸಿ ಹೊರಡಿಸಲಾಗಿತ್ತೆಂದು ಕಾರ್ಯಾನುಷ್ಠಾನದ ದೃಷ್ಟಿಯಿಂದ

ಏಕರೂಪತೆ ಮತ್ತು ಸಮನ್ವಯತೆ ಹಾಗೂ ಸಿಬ್ಬಂದಿ ರಚನೆಯಲ್ಲಿಯೂ ಕೂಡ ಸಮತೋಲನ ಇರುವುದಿಲ್ಲವೆಂದು ಈ ಅಂಶವನ್ನು ಪರಿಶೀಲಿಸಿ ಎಲ್ಲಾ ಅಕಾಡೆಮಿಗಳು ಅವುಗಳ ಕಾರ್ಯವ್ಯಾಪ್ತಿ ಬೇರೆ ಬೇರೆಯಾಗಿದ್ದರೂ ಅವುಗಳನ್ನು ಸಮನ್ವಯಗೊಳಿಸುವ ಹಿನ್ನಲೆಯಲ್ಲಿ ಏಕರೂಪತೆ ಸಾಧ್ಯವಿರುವುದರಿಂದ ಏಕರೂಪತೆ ಮತ್ತು ಸಮನ್ವಯತೆಯನ್ನು ತರಲು ಹತ್ತು ಅಕಾಡೆಮಿಗಳಿಗೆ ಏಕರೂಪತೆ ನಿಯಮಾವಳಿಯನ್ನು ಪರಿಷ್ಕರಿಸಿ ಸಿದ್ಧಪಡಿಸುವ ಪೂರ್ವದಲ್ಲಿ ಎಲ್ಲಾ ಅಕಾಡೆಮಿಗಳ ಸಂಭಾವನೆಯಲ್ಲಿ, ಸಿಬ್ಬಂದಿ ನಿರ್ವಹಣೆಯಲ್ಲಿ, ಸದಸ್ಯರ ಸಂಖ್ಯೆಯಲ್ಲಿ ಹಾಗೂ ಪ್ರಶಸ್ತಿಗಳಲ್ಲಿ ಏಕರೂಪತೆ ಅಳವಡಿಸುವ ಹಿನ್ನಲೆಯಲ್ಲಿ ದಿ:19-7-2003ರಂದು ಎಲ್ಲಾ ಅಕಾಡೆಮಿಗಳ ಅಧ್ಯಕ್ಷರು ಹಾಗೂ ರಿಜಿಸ್ಟ್ರಾರುಗಳ ಸಭೆ ಕರೆದು ಚರ್ಚಿಸಲಾಗಿದೆಯೆಂದು ಈ ಪರಿಷ್ಕೃತ ಏಕರೂಪತೆ ನಿಯಮಾವಳಿಯ ಅಗತ್ಯವನ್ನು ಸ್ವಾಗತಿಸಿ ನಿಯಮಾವಳಿಯು ಆಗಬೇಕಾಗಿದೆಯೆಂದು ಅಭಿಪ್ರಾಯಪಟ್ಟಿರುವ ಹಿನ್ನಲೆಯಲ್ಲಿ ಹತ್ತು ಅಕಾಡೆಮಿಗಳ ಏಕರೂಪತೆ ನಿಯಮಾವಳಿಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿದ್ದಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 65 ಕರಅ 2003, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2003**

ರಾಜ್ಯದಲ್ಲಿ ಹಾಲಿ ಇರುವ ಹತ್ತು ಅಕಾಡೆಮಿಗಳ ಸಾಮಾನ್ಯ ಅಂಗ ರಚನೆಯನ್ನು ರಚಿಸಿ ಅಕಾಡೆಮಿಗಳು ಅವುಗಳ ಕಾರ್ಯವ್ಯಾಪ್ತಿ ಬೇರೆ ಬೇರೆಯಾಗಿದ್ದರೂ ಅವುಗಳನ್ನು ಸಮನ್ವಯಗೊಳಿಸುವ ಹಿನ್ನಲೆಯಲ್ಲಿ ಏಕರೂಪತೆ ನಿಯಮಾವಳಿಯನ್ನು ಅನುಬಂಧದಲ್ಲಿ ಆಯಾ ಅಕಾಡೆಮಿಗಳ ಮುಂದೆ ಸೂಚಿಸಿದಂತೆ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ ಆದೇಶದವರೆಗೆ ಜಾರಿಯಲ್ಲಿ ತರಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಎಲ್. ಹೊಟಕರ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕರ್ನಾಟಕ ರಾಜ್ಯ ಅಕಾಡೆಮಿಗಳ ನಿಯಮಾವಳಿ

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಎಲ್ಲಾ ಅಕಾಡೆಮಿಗಳ ಕಾರ್ಯಚಟುವಟಿಕೆಗಳಲ್ಲಿ ಏಕರೂಪತೆಯನ್ನು ತಂದು ಅವು ಯೋಜಿತವಾಗಿ ಹಾಗೂ ಸಮನ್ವಿತವಾಗಿ ನಡೆಯುವ ದೃಷ್ಟಿಯಿಂದ ಏಕರೂಪದ ನಿಯಮಾವಳಿಗಳನ್ನು ರಚಿಸಲಾಗಿದೆ.

1. ಈ ನಿಯಮಾವಳಿಯನ್ನು ಕರ್ನಾಟಕ ರಾಜ್ಯ ಅಕಾಡೆಮಿಗಳ ನಿಯಮಾವಳಿ ಎಂದು ಕರೆಯತಕ್ಕದ್ದು.
2. ಕರ್ನಾಟಕ ಸರ್ಕಾರವು ಸ್ಥಾಪಿಸಿರುವ ಅಕಾಡೆಮಿಗಳೆಂದರೆ:-
   1. ಕರ್ನಾಟಕ ಸಾಹಿತ್ಯ ಅಕಾಡೆಮಿ
   2. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ
   3. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ
   4. ಕರ್ನಾಟಕ ನಾಟಕ ಅಕಾಡೆಮಿ
   5. ಕರ್ನಾಟಕ ಲಲಿತಕಲಾ ಅಕಾಡೆಮಿ
   6. ಕರ್ನಾಟಕ ಶಿಲ್ಪಕಲಾ ಅಕಾಡೆಮಿ
   7. ಕರ್ನಾಟಕ ಉರ್ದು ಅಕಾಡೆಮಿ
   8. ಕರ್ನಾಟಕ ತುಳು ಅಕಾಡೆಮಿ
   9. ಕರ್ನಾಟಕ ಕೊಂಕಣಿ ಅಕಾಡೆಮಿ
   10. ಕರ್ನಾಟಕ ಕೊಡವ ಅಕಾಡೆಮಿ
3. ಈ ಅಕಾಡೆಮಿಗಳ ಕೇಂದ್ರ ಕಚೇರಿಗಳು ಅವುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಲ್ಲಿ ಇರತಕ್ಕದ್ದು.

| | |
|---|---|
| 1. ಕರ್ನಾಟಕ ಸಾಹಿತ್ಯ ಅಕಾಡೆಮಿ | ಬೆಂಗಳೂರು |
| 2. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | ಬೆಂಗಳೂರು |
| 3. ಕರ್ನಾಟಕ ಜಾನಪದ ಮತ್ತು ಯಕ್ಷಗಾನ | ಬೆಂಗಳೂರು |
| 4. ಕರ್ನಾಟಕ ನಾಟಕ ಅಕಾಡೆಮಿ | ಬೆಂಗಳೂರು |
| 5. ಕರ್ನಾಟಕ ಲಲಿತಕಲಾ ಅಕಾಡೆಮಿ | ಬೆಂಗಳೂರು |
| 6. ಕರ್ನಾಟಕ ಶಿಲ್ಪಕಲಾ ಅಕಾಡೆಮಿ | ಬೆಂಗಳೂರು |
| 7. ಕರ್ನಾಟಕ ಉರ್ದು ಅಕಾಡೆಮಿ | ಬೆಂಗಳೂರು |
| 8. ಕರ್ನಾಟಕ ಕೊಡವ ಅಕಾಡೆಮಿ | ಮಡಿಕೇರಿ |
| 9. ಕರ್ನಾಟಕ ಕೊಂಕಣಿ ಅಕಾಡೆಮಿ | ಮಂಗಳೂರು |
| 10. ಕರ್ನಾಟಕ ತುಳು ಅಕಾಡೆಮಿ | ಮಂಗಳೂರು |

4. ಅಕಾಡೆಮಿಗಳು ಈ ಕೆಳಕಂಡ ಧ್ಯೇಯಗಳನ್ನು ಮತ್ತು ಉದ್ದೇಶಗಳನ್ನು ಹೊಂದಿರತಕ್ಕದ್ದು ಎಂದರೆ:

ಅ) ಆಯಾ ಅಕಾಡೆಮಿಗೆ ಸಂಬಂಧಿಸಿದ ಕ್ಷೇತ್ರದಲ್ಲಿ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದು. ಈ ಉದ್ದೇಶಕ್ಕಾಗಿ ಸಂಶೋಧನಾಲಯ, ಗ್ರಂಥಾಲಯ ಮುಂತಾದುವನ್ನು ಸ್ಥಾಪಿಸುವುದು.

ಆ) ಆಯಾ ಅಕಾಡೆಮಿಯು ತನ್ನ ಉದ್ದೇಶಗಳ ಅಭಿವೃದ್ಧಿಗಾಗಿ ಮತ್ತು ಬೆಳವಣಿಗೆಗಾಗಿ ಬೇರೆ ಕಡೆಗಳಲ್ಲಿರುವ ಅದೇ ರೀತಿಯ ಅಕಾಡೆಮಿಗಳೊಂದಿಗೆ ಮತ್ತು ಕರ್ನಾಟಕದಲ್ಲಿರುವ ಇತರ ಸಂಸ್ಥೆಗಳೊಡನೆ ಸಹಕರಿಸುವುದು ಉತ್ತೇಜನ ನೀಡುವುದು.

ಇ) ಆಯಾ ಅಕಾಡೆಮಿಯ ಕಾರ್ಯ ಚಟುವಟಿಕೆಗಳ ಉದ್ದೇಶಕ್ಕಾಗಿ ವಂತಿಕೆಗಳು ಮತ್ತು ದಾನಗಳ ಮೂಲಕ ನಿಧಿ ಸಂಗ್ರಹಣೆ ಮಾಡಬಹುದು. ಹೀಗೆ ಸಂಗ್ರಹಿಸಿದ ನಿಧಿಯನ್ನು ಅಕಾಡೆಮಿಯ ಕಾರ್ಯೋದ್ದೇಶಗಳಿಗೆ ಬದ್ಧವಾಗಿ ಬಳಸಿದ ಬಗ್ಗೆ ನಿಯಮಾನುಸಾರ ಖರ್ಚಿನ ವಿವರಗಳನ್ನು ಇಡುವುದು. ವಂತಿಕೆ ಹಾಗೂ ದಾನ ಕೊಟ್ಟವರು ಅಪೇಕ್ಷಿಸಿದಲ್ಲಿ, ಅವರ ವಂತಿಕೆ ಹಾಗೂ ದಾನದ ಮೊತ್ತದ ಖರ್ಚಿನ ವಿವರಗಳನ್ನು ಲಿಖಿತವಾಗಿ ಅವರಿಗೆ ಒದಗಿಸುವುದು.

ಈ) ಆಯಾ ಅಕಾಡೆಮಿಯು ತನ್ನ ವಿಷಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಚಾರ ಸಂಕಿರಣ ಕಾರ್ಯಾಗಾರ, ಸಂವಾದ, ಉತ್ಸವ ಮುಂತಾದ ಕಾರ್ಯಕ್ರಮಗಳನ್ನು ನಡೆಸುವುದು. ಈ ಕಾರ್ಯಕ್ರಮಗಳನ್ನು ಎರಡು ವಿಧಾನಗಳಲ್ಲಿ ವ್ಯವಸ್ಥೆಗೊಳಿಸಬಹುದು.

1. ಅಕಾಡೆಮಿಗಳೇ ನೇರವಾಗಿ ಈ ಕಾರ್ಯಕ್ರಮಗಳನ್ನು ರೂಪಿಸಿ ವ್ಯವಸ್ಥೆಗೊಳಿಸುವುದು.
2. ವಿವಿಧ ಸಂಘ ಸಂಸ್ಥೆಗಳ ಜೊತೆ ಸಂಯುಕ್ತವಾಗಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದು.

ಉ) ಕರ್ನಾಟಕ ಸರ್ಕಾರ ಕೇಂದ್ರ ಸರ್ಕಾರ ಮತ್ತು ಕೇಂದ್ರ ಅಕಾಡೆಮಿಗಳು ಅಪೇಕ್ಷಿಸಿದಾಗ ಹಾಗೂ ಅಗತ್ಯ ಬಿದ್ದಾಗ ಸೂಕ್ತ ಸಲಹೆಗಳನ್ನು ನೀಡುವುದು.

ಊ) ಅಕಾಡೆಮಿಗಳು ಆಯಾ ಕ್ಷೇತ್ರದ ವಿಶೇಷ ಅಧ್ಯಯನಕ್ಕಾಗಿ ನಿಗದಿತ ಮೊತ್ತದ ಶಿಷ್ಯವೇತನವನ್ನು ನೀಡಬಹುದು.

ಋ) ಅಕಾಡೆಮಿಗಳು ತಂತಮ್ಮ ಕ್ಷೇತ್ರ ಹಾಗೂ ವ್ಯಾಪ್ತಿಗೆ ಸೇರಿದ ಮಾಹಿತಿ ಸಂಗ್ರಹ ಹಾಗೂ ಪುಸ್ತಕ ಪ್ರಕಟಣೆಗಳನ್ನು ಕೈಗೊಳ್ಳುವುದು.

ಎ) ತನ್ನ ಉದ್ದೇಶಗಳ ಮುನ್ನಡೆಗಾಗಿ ಅಗತ್ಯವಿರಬಹುದಾದ ಮೇಲೆ ತಿಳಿಸಿದಂಥ ಧ್ಯೇಯೋದ್ದೇಶಗಳಿಗೆ ಅನುಗುಣವಾದ ಇತರ ಕಾರ್ಯಗಳನ್ನು ನಿರ್ವಹಿಸುವುದು.

ಏ) ಅಕಾಡೆಮಿಗಳು ತಂತಮ್ಮ ಕ್ಷೇತ್ರದ ಪ್ರತಿಭಾನ್ವಿತರಿಗೆ ಪ್ರಶಸ್ತಿ, ಪುರಸ್ಕಾರ ಹಾಗೂ ಬಹುಮಾನಗಳನ್ನು ಪ್ರತಿವರ್ಷವೂ ಕೊಡಬೇಕು. ಅವುಗಳ ವಿವರ ಈ ಮುಂದಿನಂತೆ ಇರುತ್ತದೆ.

**1. ಕರ್ನಾಟಕ ಸಾಹಿತ್ಯ ಅಕಾಡೆಮಿ:**

ಅ) ಐದು ಗೌರವ ಪ್ರಶಸ್ತಿಗಳು: ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐವರು ಲೇಖಕರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00 ಗಳು

ಆ) **ಪುಸ್ತಕ ಬಹುಮಾನಗಳು:**
ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಪರಿಗಣಿಸಿ ಪ್ರತಿ ಪ್ರಕಾರದ ಉತ್ತಮ ಪುಸ್ತಕಕ್ಕೆ 5,000.00 ಗಳ ಬಹುಮಾನಗಳನ್ನು ನೀಡುವುದು.

**2. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ:**

ಅ) ಜಾನಪದ ಮತ್ತು ಯಕ್ಷಗಾನ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಅವರ ಹಿರಿತನ ಹಾಗೂ ಪಕ್ವತೆಯ ಮಾನದಂಡವನ್ನು ಮಾತ್ರ ಅನುಲಕ್ಷಿಸಿ ಒಟ್ಟು ಐವರಿಗೆ ಆ ಕ್ಷೇತ್ರದ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಹಿನ್ನೆಲೆಯ ಹೆಸರಿಟ್ಟು ಗೌರವ ಪ್ರಶಸ್ತಿಯನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00

ಆ) ಜಾನಪದ ಮತ್ತು ಯಕ್ಷಗಾನ ಕ್ಷೇತ್ರದ ವಿವಿಧ ಪ್ರಕಾರಗಳನ್ನು ಪರಿಗಣಿಸಿ ಗರಿಷ್ಠ 10 ಜನ ಕಲಾವಿದರಿಗೆ ವಾರ್ಷಿಕ ಪ್ರಶಸ್ತಿಯನ್ನು ನೀಡುವುದು ವಾರ್ಷಿಕ ಪುರಸ್ಕಾರದ ಮೊತ್ತ ತಲಾ ರೂ. 5,000.00

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**3. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ:**

ಅ) ಸಂಗೀತ ಕ್ಷೇತ್ರದಲ್ಲಿ, ನೃತ್ಯ, ಗಮಕ, ಕಾವ್ಯ, ವಾಚನ ಮುಂತಾದ ಕ್ಷೇತ್ರಗಳೂ ಸೇರಿದಂತೆ ಆಯಾ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐವರಿಗೆ ಪ್ರಶಸ್ತಿಗಳನ್ನು ಕೊಡುವುದು ಗೌರವ ಪ್ರಶಸ್ತಿಯ ಮೊತ್ತ ತಲಾ 10,000.00ಗಳು.

ಆ) ಸಂಗೀತ, ನೃತ್ಯ, ಗಮಕ, ಕಾವ್ಯ, ವಾಚನ, ವಿವಿಧ ಪ್ರಕಾರಗಳನ್ನು ಪರಿಗಣಿಸಿ ಒಟ್ಟು ಹತ್ತು ಕಲಾವಿದರನ್ನು ಮೀರದಂತೆ ವಾರ್ಷಿಕ ಪ್ರಶಸ್ತಿಯನ್ನು ಕೊಡುವುದು. ಪುರಸ್ಕಾರದ ಮೊತ್ತ ತಲಾ ರೂ. 5,000.00

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**4. ಕರ್ನಾಟಕ ನಾಟಕ ಅಕಾಡೆಮಿ:**

ಅ) ನಾಟಕ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐದು ರವ ಪ್ರಶಸ್ತಿಗಳನ್ನು ಕೊಡುವುದು. ರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00ಗಳು.

ಆ) ನಾಟಕ ಕ್ಷೇತ್ರದ ವಿವಿಧ ಪ್ರಕಾರಗಳಲ್ಲಿನ ಕೆಲಸವನ್ನು ಪರಿಗಣಿಸಿ ಹತ್ತು ಕಲಾವಿದರನ್ನು ಮೀರದಂತೆ ವಾರ್ಷಿಕ ಪ್ರಶಸ್ತಿಯನ್ನು ಕೊಡುವುದು. ಪ್ರಶಸ್ತಿ ಮೊತ್ತ ತಲಾ ರೂ. 5,000.00ಗಳು.

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**5. ಕರ್ನಾಟಕ ಲಲಿತಕಲಾ ಅಕಾಡೆಮಿ:**

ಅ) ಲಲಿತಕಲೆಯ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00ಗಳು.

ಆ) ವಿವಿಧ ಪ್ರಕಾರಗಳ ಕಲಾಕೃತಿಗಳನ್ನು ಪರಿಗಣಿಸಿ ಹತ್ತನ್ನು ಮೀರದಂತೆ ಉತ್ತಮ ಕಲಾಕೃತಿಗಳನ್ನು ಆಯ್ಕೆ ಮಾಡಿ ವಾರ್ಷಿಕ ಬಹುಮಾನಗಳನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. 5,000.00ಗಳು.

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**6. ಕರ್ನಾಟಕ ಉರ್ದು ಅಕಾಡೆಮಿ:**

ಅ) ಉರ್ದು ಕ್ಷೇತ್ರಕ್ಕೆ ಸಲ್ಲಿಸಿದ ಒಟ್ಟು ಸೇವೆಯನ್ನು ಪರಿಗಣಿಸಿ ಕರ್ನಾಟಕದ ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00ಗಳು.

ಆ) ಕನ್ನಡ-ಉರ್ದು ಭಾಷಾಂತರಕಾರರನ್ನು ಒಳಗೊಂಡಂತೆ ಉರ್ದು ಕ್ಷೇತ್ರದ ಪುಸ್ತಕಗಳನ್ನು ಪರಿಗಣಿಸಿ ಹತ್ತಕ್ಕೆ ಮೀರದಂತೆ ಪುಸ್ತಕ ಬಹುಮಾನಗಳನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. 5,000.00ಗಳು.

ಇ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**7. ಕರ್ನಾಟಕ ಶಿಲ್ಪಕಲಾ ಅಕಾಡೆಮಿ:**

ಅ) ಶಿಲ್ಪಕಲೆಯ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐವರನ್ನು ಮೀರದಂತೆ ಐದು ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00ಗಳು.

ಆ) ಆಯಾ ವರ್ಷದಲ್ಲಿ ಪ್ರಕಟಿಸಲಾದ ಒಂದು ಶ್ರೇಷ್ಠ ಪುಸ್ತಕಕ್ಕೆ ಬಹುಮಾನ ನೀಡುವುದು.

**8. ಕರ್ನಾಟಕ ತುಳು ಅಕಾಡೆಮಿ:**

ಅ) ತುಳು ಭಾಷೆ, ಸಾಹಿತ್ಯ ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಯನ್ನು ಪರಿಗಣಿಸಿ ಕರ್ನಾಟಕದ ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00ಗಳು.

ಆ) ಕನ್ನಡ-ತುಳು ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಹತ್ತು ಪುಸ್ತಕ ಬಹುಮಾನವನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. 5,000.00ಗಳು.

**9. ಕರ್ನಾಟಕ ಕೊಂಕಣಿ ಅಕಾಡೆಮಿ:**

ಅ) ಕೊಂಕಣಿ ಭಾಷೆ, ಸಾಹಿತ್ಯ ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಯನ್ನು ಪರಿಗಣಿಸಿ ಕರ್ನಾಟಕದ ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಪ್ರಶಸ್ತಿಯ ಮೊತ್ತ ತಲಾ ರೂ. 10,000.00 ಗಳು.

ಆ) ಕನ್ನಡ-ಕೊಂಕಣಿ ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಹತ್ತು ಪುಸ್ತಕ ಬಹುಮಾನವನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. 5,000.00ಗಳು.

**10. ಕರ್ನಾಟಕ ಕೊಡವ ಅಕಾಡೆಮಿ:**

ಅ) ಕೊಡವ ಭಾಷೆ, ಸಾಹಿತ್ಯ ಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸಿದ ಒಟ್ಟು ಸೇವೆಗಾಗಿ ಐವರನ್ನು ಮೀರದಂತೆ ಗೌರವ ಪ್ರಶಸ್ತಿಗಳನ್ನು ಕೊಡುವುದು. ಗೌರವ ಪ್ರಶಸ್ತಿಯ ಮೊತ್ತ ತಲಾ ರೂ. 10,000.00 ಗಳು.

ಆ) ಕನ್ನಡ-ಕೊಡವ ಭಾಷಾಂತರವನ್ನು ಒಳಗೊಂಡಂತೆ ಗರಿಷ್ಠ ಹತ್ತು ಪುಸ್ತಕ ಬಹುಮಾನವನ್ನು ಕೊಡುವುದು. ಬಹುಮಾನದ ಮೊತ್ತ ತಲಾ ರೂ. 5,000.00ಗಳು.

**5. ಅಕಾಡೆಮಿಯ ಅಧಿಕಾರಿ ವರ್ಗ: ಈ ಮುಂದಿನವರು ಅಕಾಡೆಮಿಯ ಅಧಿಕಾರಿಗಳಾಗಿರುತ್ತಾರೆ.**

1. ಅಧ್ಯಕ್ಷರು
2. ರಿಜಿಸ್ಟ್ರಾರರು
3. ಅರ್ಥ ಸದಸ್ಯರು.

(**ವಿವರಣೆ:** ಇನ್ನು ಮುಂದೆ ಅರ್ಥ ಸದಸ್ಯರು ಎಂದು ಉಲ್ಲೇಖಿಸಲಾಗುವ ಕಡೆಗಳಲ್ಲಿ ಬೆಂಗಳೂರು ಕೇಂದ್ರ ಸ್ಥಾನವಾಗಿರುವ ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿ, ಕರ್ನಾಟಕ ನಾಟಕ ಅಕಾಡೆಮಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಕರ್ನಾಟಕ ಉರ್ದು ಅಕಾಡೆಮಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಗಳಿಗೆ ಮಾತ್ರ ಅನ್ವಯಿಸಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಲೆಕ್ಕ ಪತ್ರಾಧಿಕಾರಿ ಈ ಅಕಾಡೆಮಿಗಳ ಪದ ನಿಮಿತ್ತ ಅರ್ಥ ಸದಸ್ಯ ಎಂದೂ: ಮಡಿಕೇರಿ ಕೇಂದ್ರ ಸ್ಥಾನವಾಗಿರುವ ಕರ್ನಾಟಕ ಕೊಡವ ಅಕಾಡೆಮಿಗೆ ಅನ್ವಯಿಸಿ ಕೊಡಗು ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರು ಪದನಿಮಿತ್ತ ಅರ್ಥ ಸದಸ್ಯ ಎಂದೂ ಮಂಗಳೂರು ಕೇಂದ್ರ ಸ್ಥಾನವಾಗಿರುವ ಕರ್ನಾಟಕ ತುಳು ಅಕಾಡೆಮಿ, ಕರ್ನಾಟಕ ಕೊಂಕಣಿ ಅಕಾಡೆಮಿಗಳಿಗೆ ಅನ್ವಯಿಸಿ ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಸಹಾಯಕ ನಿರ್ದೇಶಕರು ಪದನಿಮಿತ್ತ ಅರ್ಥ ಸದಸ್ಯ ಎಂದೂ ಪರಿಭಾವಿಸತಕ್ಕದ್ದು.)

**(1) ಅಧ್ಯಕ್ಷರು:**

ಅ) ರಾಜ್ಯ ಸರ್ಕಾರವು ಅಧ್ಯಕ್ಷರನ್ನು ನಾಮ ನಿರ್ದೇಶಿಸುತ್ತದೆ ಮತ್ತು ಅವರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

ಆ) ಅಧ್ಯಕ್ಷರು ಅಕಾಡೆಮಿಯ ಮುಖ್ಯಾಧಿಕಾರಿಯಾಗಿರತಕ್ಕದ್ದು ಅವರು ಅಕಾಡೆಮಿಯ ಎಲ್ಲಾ ಸಮಿತಿಗಳ ಪದನಿಮಿತ್ತ ಸದಸ್ಯರಾಗಿರತಕ್ಕದ್ದು ಮತ್ತು ಈ ಸ್ವಾಯತ್ತ ನಿಯಮಾವಳಿಯಡಿ ಮಾಡಲಾದ ನಿಯಮಗಳ ಮತ್ತು ಉಪಬಂಧಗಳ ಮೇರೆಗೆ ನೇಮಕಗೊಂಡ ಸ್ಥಾಯೀ ಸಮಿತಿಯ ಮತ್ತು ಇತರ ಸಮಿತಿಗಳ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು.

ಇ) ಅಧ್ಯಕ್ಷರು ಅಕಾಡೆಮಿಯೊಡನೆ ಅಥವಾ ಸಂದರ್ಭಾನುಸಾರ ಸ್ಥಾಯೀ ಸಮಿತಿಯೊಡನೆ ಸಮಾಲೋಚಿಸದೆ ಪ್ರತಿ ವರ್ಷಕ್ಕೆ ಗರಿಷ್ಠ ರೂ. 20,000-00ಗೊಳಪಟ್ಟು ಪ್ರತಿ ಸಂದರ್ಭದಲ್ಲೂ ಪ್ರತಿ 5000-00 ರೂಪಾಯಿ ಮಿತಿಯವರೆಗೆ ಜರೂರು ಸ್ವರೂಪದ ವೆಚ್ಚದ ಯಾವುದೇ ಕಾರ್ಯಕ್ರಮವನ್ನು ನಿರ್ಧರಿಸಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಅಧ್ಯಕ್ಷರಿಂದ ಹಾಗೆ

ಅನುಮೋದನೆ ಪಡೆದ ವೆಚ್ಚ ಭರಿಸಲು ರಿಜಿಸ್ಟ್ರಾರ್‌ರು ವಿಧಿಬದ್ಧರಾಗಿರತಕ್ಕದ್ದು ಹಾಗಿದ್ದರೂ ಅಧ್ಯಕ್ಷರು ಇಂಥ ವೆಚ್ಚದ ವಿವರಗಳನ್ನು ಅಕಾಡೆಮಿಯ ಮುಂದಿನ ಸಭೆಯಲ್ಲಿ ಇಡತಕ್ಕದ್ದು.

ಈ) ಅಧ್ಯಕ್ಷರು ಗೌರವ ಸಂಭಾವನೆಯಾಗಿ ಮಾಹೆಯಾನ ರೂ. 5,000-00 ಗಳನ್ನು ಪಡೆಯಬಹುದು.

ಉ) ಅಧ್ಯಕ್ಷರ ನಿವಾಸ ದೂರವಾಣಿ ಶುಲ್ಕವನ್ನು ಮಾತ್ರ ಅಕಾಡೆಮಿ ಭರಿಸಬೇಕು.

ಊ) ಅಕಾಡೆಮಿಯ ಕೇಂದ್ರ ಸ್ಥಳದಿಂದ ಹೊರಗಡೆಯಿಂದ ನಾಮ ನಿರ್ದೇಶಿತನಾದ ಅಧ್ಯಕ್ಷರ ಸಂದರ್ಭದಲ್ಲಿ ಅಕಾಡೆಮಿಯ ಕಾರ್ಯಕಲಾಪಗಳಿಗೆ ಕೇಂದ್ರ ಸ್ಥಾನಕ್ಕೆ ಬಂದಾಗ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಸರ್ಕಾರಿ ನಿಯಮಗಳಂತೆ ಪಡೆಯಬೇಕು. ಅಕಾಡೆಮಿಯ ಸಭೆಗಳ ಸಭಾಭತ್ಯೆ ಪಡೆಯುವಂತಿಲ್ಲ.

ಋ) ಅಕಾಡೆಮಿಯ ಅಧ್ಯಕ್ಷರಿಗೆ ಸರ್ಕಾರಿ ವಾಹನ ವ್ಯವಸ್ಥೆ ಕಲ್ಪಿಸಲಾಗುವುದಿಲ್ಲ. ಆದರೆ ಅಕಾಡೆಮಿಗಳ ಎಲ್ಲ ಕಾರ್ಯಗಳಿಗೆ ಪ್ರವಾಸ ಮಾಡುವಾಗ ಸರ್ಕಾರೇತರ ಅಧ್ಯಕ್ಷರ ಭತ್ಯೆ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

**(2) ರಿಜಿಸ್ಟ್ರಾರರು:**

ಅ) ಅಕಾಡೆಮಿಯ ರಿಜಿಸ್ಟ್ರಾರರು ಅಕಾಡೆಮಿಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು.

ಆ) ಅವರು ಅಕಾಡೆಮಿಯು ಸ್ಥಾಪಿಸಬಹುದಾದ ಸ್ಥಾಯಿ ಸಮಿತಿಯ ಮತ್ತು ಇತರ ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು.

ಇ) ರಿಜಿಸ್ಟ್ರಾರ್‌ರ ಕರ್ತವ್ಯಗಳು ಕೆಳಕಂಡಂತಿರತಕ್ಕದ್ದು:-

1. ಅಕಾಡೆಮಿಯ ದಾಖಲೆಗಳನ್ನು ಮತ್ತು ಅಂಥ ಇತರ ಸ್ವತ್ತುಗಳನ್ನು ಸಂರಕ್ಷಿಸುವುದು.
2. ಅಕಾಡೆಮಿಯ ಪರವಾಗಿ ಅಧಿಕೃತ ಪತ್ರ ವ್ಯವಹಾರ ನಡೆಸುವುದು.
3. ಅಕಾಡೆಮಿಯ ಮತ್ತು ಅಕಾಡೆಮಿಯಿಂದ ನೇಮಕಗೊಂಡ ಎಲ್ಲಾ ಸಮಿತಿಗಳು ಸಭೆ ನಡೆಸುವ ಬಗ್ಗೆ ಎಲ್ಲಾ ನೋಟೀಸುಗಳನ್ನು ನೀಡುವುದು.
4. ಈ ಎಲ್ಲಾ ಸಭೆಗಳ ನಡವಳಿಗಳನ್ನು ಸಿದ್ಧಪಡಿಸುವುದು ಮತ್ತು ನಿರ್ವಹಿಸುವುದು.
5. ಅಕಾಡೆಮಿಯಿಂದ ಅನುಮೋದಿತವಾದ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದು.
6. ಅಕಾಡೆಮಿಯ ಪರವಾಗಿ ಕರಾರುಗಳಿಗೆ ರುಜು ಹಾಕುವುದು.
7. ಚಾಲ್ತಿ ಸರ್ಕಾರಿ ಆರ್ಥಿಕ ಸಂಹಿತೆ ಹಾಗೂ ಸಾದಿಲ್ವಾರು ನಿಯಮಗಳ ವ್ಯಾಪ್ತಿಗೊಳಪಟ್ಟು ವೆಚ್ಚವನ್ನು ಭರಿಸುವುದು. ಮತ್ತು ಅಕಾಡೆಮಿಯ ಕಾರ್ಯ ಚಟುವಟಿಕೆ ಹಾಗೂ ಲೆಕ್ಕ ಪತ್ರಗಳ ತ್ರೈಮಾಸಿಕ ವರದಿಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರಿಗೆ ಸಲ್ಲಿಸುವುದು.
8. ಸ್ವತ್ತು ಮತ್ತು ವಿನಿಯೋಗಗಳ ವ್ಯವಸ್ಥೆ ನೋಡಿಕೊಳ್ಳತಕ್ಕದ್ದು ಮತ್ತು ವಾರ್ಷಿಕ ಅಂದಾಜುಗಳನ್ನು ಮತ್ತು ಲೆಕ್ಕಪತ್ರಗಳ ವಿವರಣೆಗಳನ್ನು ಅರ್ಥ ಸದಸ್ಯರ ಸಮಾಲೋಚನೆಯಿಂದ ತಯಾರಿಸುವ ಮತ್ತು ಅಕಾಡೆಮಿಗಳಿಗೆ ಅವುಗಳನ್ನು ಒಪ್ಪಿಸುವ ಜವಾಬ್ದಾರಿ ಹೊಂದಿರತಕ್ಕದ್ದು.
9. ಅಕಾಡೆಮಿಯ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಬರತಕ್ಕದ್ದು ಮತ್ತು ಅಕಾಡೆಮಿಗೆ ಸಂದಾಯವಾಗುವ ಯಾವುದೇ ಹಣಕ್ಕೆ ರಸೀದಿ ಹಾಕುವುದು.
10. ಅಕಾಡೆಮಿಯು ವಹಿಸಿಕೊಡಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸಬಹುದು.

**(3) ಅರ್ಥ ಸದಸ್ಯರು:**

ಅ) 1) ಲೆಕ್ಕ ಪತ್ರಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಹಾಗೂ ಪದನಿಮಿತ್ತ ಅರ್ಥ ಸದಸ್ಯ.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಲೆಕ್ಕ ಪತ್ರಾಧಿಕಾರಿಯು ಅಕಾಡೆಮಿಯ ಪದನಿಮಿತ್ತ ಅರ್ಥ ಸದಸ್ಯರಾಗಿರತಕ್ಕದ್ದು ಮತ್ತು ಸ್ಥಾಯೀ ಸಮಿತಿಯ ಸದಸ್ಯರೂ ಆಗಿರತಕ್ಕದ್ದು.

2) ಅಕಾಡೆಮಿಯ ನಿಯಮಗಳಿಗೆ ಒಳಪಟ್ಟು ಮತ್ತು ರಿಜಿಸ್ಟ್ರಾರ್‌ರ ಸಹ ಹೊಣೆಗಾರಿಕೆಯಲ್ಲಿ ಹಣವನ್ನು ಅನುಮೋದಿತ ಕಾರ್ಯಕ್ರಮಗಳಿಗೆ ಸರಿಯಾಗಿ ಬಳಸಿಕೊಳ್ಳಲು ಜವಾಬ್ದಾರರಾಗಿರತಕ್ಕದ್ದು.

3) ಅಕಾಡೆಮಿಯಿಂದ ಪಾವತಿ ಮಾಡುವ ಹಣಕ್ಕೆ ಸೂಕ್ತ ದಾಖಲೆ ಪಡೆಯುವುದು.

ಆ) 1) ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕೊಡಗು, ದಕ್ಷಿಣ ಕನ್ನಡ ಜಿಲ್ಲೆ ಇವರು ಪದನಿಮಿತ್ತ ಅರ್ಥ ಸದಸ್ಯರಾಗಿರತಕ್ಕದ್ದು. ಮತ್ತು ಸ್ಥಾಯೀ ಸಮಿತಿಯ ಸದಸ್ಯರೂ ಆಗಿರತಕ್ಕದ್ದು.

2) ಅಕಾಡೆಮಿಯ ನಿಯಮಗಳಿಗೆ ಒಳಪಟ್ಟು ಮತ್ತು ರಿಜಿಸ್ಟ್ರಾರ್ ಸಹ ಹೊಣೆಗಾರಿಕೆಯಲ್ಲಿ ಹಣವನ್ನು ಅನುಮೋದಿತ ಕಾರ್ಯಕ್ರಮಗಳಿಗೆ ಸರಿಯಾಗಿ ಬಳಸಿಕೊಳ್ಳಲು ಜವಾಬ್ದಾರರಾಗಿರತಕ್ಕದ್ದು.

3) ಅಕಾಡೆಮಿಯಿಂದ ಪಾವತಿ ಮಾಡುವ ಹಣಕ್ಕೆ ಸೂಕ್ತ ದಾಖಲೆ ಪಡೆಯುವುದು.

**6) ಅಕಾಡೆಮಿಯ ಪ್ರಾಧಿಕಾರಗಳು:**

ಈ ಕೆಳಕಂಡವು ಅಕಾಡೆಮಿಯ ಪ್ರಾಧಿಕಾರಗಳಾಗಿರತಕ್ಕದ್ದು ಎಂದರೆ:

1) ಅಕಾಡೆಮಿ 2) ಸ್ಥಾಯೀ ಸಮಿತಿ

**(1) ಅಕಾಡೆಮಿ:**

1. ಅಕಾಡೆಮಿಯು ಕೆಳಕಂಡ 15 ಸದಸ್ಯರನ್ನು ಮಾತ್ರ ಹೊಂದಿರತಕ್ಕದ್ದು.

ಅ. ಅಧ್ಯಕ್ಷರು

ಆ. ರಿಜಿಸ್ಟ್ರಾರರು

ಇ. ಅರ್ಥ ಸದಸ್ಯರು

ಈ. ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ 10 ಮಂದಿ ಸದಸ್ಯರು

ಉ. ಅಕಾಡೆಮಿಯ ಮೊದಲ ಸಭೆಯಲ್ಲಿ ಅಕಾಡೆಮಿಯು ಆಯ್ಕೆ ಮಾಡಿಕೊಂಡ 2 ಮಂದಿ (ಕೋ-ಆಪ್) ಸಹ ಸದಸ್ಯರು.

ಊ ಸದಸ್ಯರ ಅವಧಿ ಮೂರು ವರ್ಷಗಳು

ಋ. ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ ಅಧ್ಯಕ್ಷರು: ಸದಸ್ಯರು ರಾಜೀನಾಮೆ ನೀಡಿದ ಅಥವಾ ಮರಣ ಹೊಂದಿದ ಅಥವಾ ಕಾನೂನಿನ ಕಾರಣದಿಂದ ಮುಂದುವರೆಯಲು ಅಸಮರ್ಥರಾದ ಕಾರಣದಿಂದ ಖಾಲಿಯಾದ ಯಾವುದೇ ಸ್ಥಾನವನ್ನು ತುಂಬಲು ರಾಜ್ಯ ಸರ್ಕಾರವು ವ್ಯಕ್ತಿಗಳನ್ನು ನಾಮ ನಿರ್ದೇಶಿಸಬಹುದು ಹಾಗೆ ನಾಮ ನಿರ್ದೇಶಿತನಾದ ವ್ಯಕ್ತಿಯು ಅಕಾಡೆಮಿಯ ಉಳಿದ ಬಾಕಿ ಅವಧಿಗೆ ಮಾತ್ರ ಪದಧಾರಣ ಮಾಡತಕ್ಕದ್ದು.

ಎ. ಸಹ ಆಯ್ಕೆಯ ಸದಸ್ಯರು ರಾಜೀನಾಮೆ ನೀಡಿದಲ್ಲಿ ಅಥವಾ ಮೃತನಾದಲ್ಲಿ ಅಕಾಡೆಮಿಯಲ್ಲಿನ ಜೊತೆಗೆ ಆಯ್ಕೆ ಮಾಡಿಕೊಂಡ ಸದಸ್ಯರ ಅವಧಿ ಮುಗಿಯುವವರೆಗೆ ಅವನ ಸ್ಥಾನದಲ್ಲಿ ಬೇರೊಬ್ಬರನ್ನು ತುಂಬಿಕೊಳ್ಳತಕ್ಕದ್ದು.

ಏ. ಅಧಿಕೃತ ಸದಸ್ಯರು ಮತ್ತು ಸಹ ಆಯ್ಕೆ ಸದಸ್ಯರು ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಅಕಾಡೆಮಿಗಳ ಸದಸ್ಯನಾಗಿರತಕ್ಕದ್ದಲ್ಲ ಮತ್ತು ಸತತವಾಗಿ ಒಂದಕ್ಕಿಂತ ಹೆಚ್ಚು ಅವಧಿಗೆ ಅಕಾಡೆಮಿಯ ಸದಸ್ಯನಾಗಿ ನಾಮನಿರ್ದೇಶಿತನಾಗಿರತಕ್ಕುದ್ದಲ್ಲ.

11. **ಅಕಾಡೆಮಿಯ ಕರ್ತವ್ಯಗಳು ಮತ್ತು ಅಧಿಕಾರಗಳು:**

ಅ. ಈ ನಿಯಮಗಳಡಿ ಉಪಬಂಧಿಸಿದಂತೆ ಸರ್ವ ಸದಸ್ಯರ ಮೊದಲ ಸಭೆಯಲ್ಲಿ ಸ್ಥಾಯೀ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವುದು ಸರ್ವ ಸದಸ್ಯರ ಸಭೆಯ ಕೋರಂ 1:3 ಇರಬೇಕು.

ಆ. ಯಾವುದೇ ಸದಸ್ಯರು ಅನುಕ್ರಮವಾಗಿ ನಿರಂತರ ಮೂರು ಸಭೆಗಳಿಗೆ ಗೈರು ಹಾಜರಾದರೆ ಆ ಸದಸ್ಯನ ಸದಸ್ಯತ್ವವನ್ನು ರದ್ದು ಮಾಡಲಾಗುವುದು.

ಇ. ನಿರ್ದಿಷ್ಟ ಉದ್ದೇಶಗಳಿಗಾಗಿ ಮತ್ತು ನಿರ್ದಿಷ್ಟ ಅವಧಿಗಾಗಿ ತನ್ನ ಸದಸ್ಯರ ಪೈಕಿಯಿಂದ ಆಯ್ಕೆ ಮಾಡಿದ ಪ್ರತಿಯೊಂದು ಉಪಸಮಿತಿಯಲ್ಲಿ 3 ಕ್ಕಿಂತ ಹೆಚ್ಚು ಸದಸ್ಯರಿರದಂತೆ ಉಪ ಸಮಿತಿಗಳನ್ನು ರಚಿಸುವುದು. ಈ ಉಪಸಮಿತಿಗೆ ನಿರ್ದಿಷ್ಟ ಕೆಲಸ ಮತ್ತು ಅವಧಿಗಾಗಿ ಹೊರಗಿನಿಂದ ಪರಿಣಿತರನ್ನು: ಸದಸ್ಯರನ್ನು ತೆಗೆದುಕೊಳ್ಳಬಹುದು. ಈ ಸಮಿತಿಗಳು ತಮ್ಮ ವರದಿಗಳನ್ನು: ಶಿಫಾರಸ್ಸುಗಳನ್ನು ಅಕಾಡೆಮಿಗೆ ಒಪ್ಪಿಸತಕ್ಕದ್ದು.

ಈ. ಸ್ಥಾಯೀ ಸಮಿತಿಯು ಪ್ರಸ್ತಾವಿಸಿದ ಕಾರ್ಯಕ್ರಮಗಳನ್ನು ಮತ್ತು ನಿರ್ದಿಷ್ಟ ಯೋಜನೆಗಳನ್ನು ಹಾಗೂ ವಾರ್ಷಿಕ ಬಜೆಟ್ಟನ್ನು ಪರಿಶೀಲಿಸುವುದು ಮತ್ತು ಅನುಮೋದಿಸುವುದು ಮತ್ತು ಬಜೆಟ್‌ನಲ್ಲಿ ಹಂಚಿಕೆ ಮಾಡಿದ ಹಣದಲ್ಲಿ ಕಾರ್ಯಕ್ರಮವನ್ನು ಜಾರಿಗೊಳಿಸುವುದು.

ಉ. ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮಾರ್ಗದರ್ಶನ ಸೂತ್ರಗಳನ್ನು ರಚಿಸುವುದು.

ಊ. ಅಕಾಡೆಮಿಯು, ಆರ್ಥಿಕ ವರ್ಷದಲ್ಲಿ ತನ್ನ ಸರ್ವ ಸದಸ್ಯರ ಸಭೆಯಲ್ಲಿ ಅಥವಾ ಸ್ಥಾಯೀ ಸಮಿತಿಯು ನಿಗದಿಪಡಿಸಿದ ಸ್ಥಳದಲ್ಲಿ ಮತ್ತು ಆ ದಿನಾಂಕದಂದು ನಾಲ್ಕು ತಿಂಗಳಿಗೊಂದು ಸಲ ಸಭೆ ಸೇರತಕ್ಕದ್ದು. ಅಧ್ಯಕ್ಷರು ಅಥವಾ ಸ್ಥಾಯೀ ಸಮಿತಿಯು ತಾವಾಗಿಯೇ ಅಥವಾ ಅಕಾಡೆಮಿಯ 1:3 ರಷ್ಟು ಸದಸ್ಯರಿಗಿಂತ ಕಡಿಮೆಯಿಲ್ಲದಷ್ಟು ಸದಸ್ಯರ ಕೋರಿಕೆಯ ಮೇರೆಗೆ ಯಾವುದೇ ಇತರ ಸಮಯದಲ್ಲಿ ವಿಶೇಷ ಸಭೆಯನ್ನು ಕರೆಯಬಹುದು.

ಋ. ಅಕಾಡೆಮಿಯು ನಿಯಮ 7ರಲ್ಲಿ ವಿವರಿಸಿರುವಂತೆ ವಿವಿಧ ಮೂಲಗಳ ಮೂಲಕ ಸರ್ಕಾರದಿಂದ ಮಂಜೂರಾದ ಅನುದಾನಗಳೂ ಸೇರಿದಂತೆ ತನ್ನ ನಿಧಿಗಳ ಪರಿಮಿತಿಗಳೊಡನೆ ಅಕಾಡೆಮಿಯ ಉದ್ದೇಶ, ಗುರಿ ಮತ್ತು ಧ್ಯೇಯಗಳಿಗಾಗಿ ಮಂಜೂರಾತಿಯ ಎಲ್ಲ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಚಲಾಯಿಸತಕ್ಕದ್ದು.

2. **ಸ್ಥಾಯೀ ಸಮಿತಿ:**

1. ಸ್ಥಾಯೀ ಸಮಿತಿಯು ಈ ಕೆಳಕಂಡ 7 ಮಂದಿ ಸದಸ್ಯರನ್ನು ಹೊಂದಿರುತ್ತದೆ ಅಂದರೆ:

ಅ. ಅಧ್ಯಕ್ಷರು

ಆ. ರಿಜಿಸ್ಟ್ರಾರರು

ಇ. ಅರ್ಥ ಸದಸ್ಯರು

ಈ. ಅಕಾಡೆಮಿಯ ಸಾಮಾನ್ಯ ಸಭೆ ಆಯ್ಕೆ ಮಾಡುವ 4 ಮಂದಿ ಸದಸ್ಯರು

2. ಸ್ಥಾಯೀ ಸಮಿತಿಯು ಕೆಳಕಂಡ ಅಧಿಕಾರ ಮತ್ತು ಕರ್ತವ್ಯಗಳನ್ನು ಹೊಂದಿದೆ.

ಅ. ಅಕಾಡೆಮಿಯ ಕಾರ್ಯಕಾರಿ ಅಧಿಕಾರವನ್ನು ಚಲಾಯಿಸುವುದು.

ಆ. ಅಕಾಡೆಮಿಯ ಮತ್ತು ಅದರ ಕಛೇರಿಯ ಕೆಲಸದ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಹೊಣೆಯಾಗಿರುವುದು.

ಇ. ಅಕಾಡೆಮಿಯ ಕಾರ್ಯಕ್ರಮಗಳನ್ನು ಪರ್ಯಾಲೋಚಿಸುವುದು. ಮತ್ತು ನಿರ್ದಿಷ್ಟ ಯೋಜನೆಗಳನ್ನು ಅಕಾಡೆಮಿಗೆ ಒಪ್ಪಿಸುವುದು.

ಈ. ಅಕಾಡೆಮಿಯ ಅನುಮೋದನೆಗಾಗಿ ಒಪ್ಪಿಸತಕ್ಕ ಅಕಾಡೆಮಿಯ ವಾರ್ಷಿಕ ಬಜೆಟನ್ನು (ಸರ್ಕಾರದಿಂದ ಗೊತ್ತುಪಡಿಸಿದ ಆರ್ಥಿಕ ಮಿತಿಗಳಿಗೆ ಒಳಪಟ್ಟು ರೂಪಿಸುವುದು).

ಉ. ಅಕಾಡೆಮಿಯ ಪರಿಶೀಲನೆಗಾಗಿ ಅಕಾಡೆಮಿಯ ವಾರ್ಷಿಕ ವರದಿಯನ್ನು ಮತ್ತು ಲೆಕ್ಕಪತ್ರಗಳನ್ನು ತಯಾರಿಸುವುದು.

ಊ. ಸ್ಥಾಯೀ ಸಮಿತಿಯು ತಿಂಗಳಲ್ಲಿ ಒಂದು ಸಲ ಸಭೆ ಸೇರಬೇಕು. ಆದರೆ ಅತ್ಯಂತ ಅಗತ್ಯವಾದ ತುರ್ತು ಸಂದರ್ಭದಲ್ಲಿ ಇನ್ನೊಂದು ಸಭೆ ಸೇರಬಹುದು (ಉದಾಹರಣೆ: ಪ್ರಶಸ್ತಿ ಪ್ರದಾನ ಸಮಾರಂಭ ಇತ್ಯಾದಿ)

ಋ. ಅಕಾಡೆಮಿಯ ಅಧ್ಯಕ್ಷರು ಸ್ಥಾಯೀ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅವರ ಗೈರು ಹಾಜರಿಯಲ್ಲಿ ಹಾಜರಿದ್ದ ಸದಸ್ಯರು ತಮ್ಮ ಪೈಕಿ ಒಬ್ಬ ಸದಸ್ಯರನ್ನು ಅಂಥ ಸಭೆಯ ಅಧ್ಯಕ್ಷತೆ ವಹಿಸಲು ಚುನಾಯಿಸತಕ್ಕದ್ದು.

7. **ಅಕಾಡೆಮಿಯ ಹಣಕಾಸು:**

ಅ. ಅಕಾಡೆಮಿಯ ನಿಧಿಗಳು ಕೆಳಕಂಡವುಗಳನ್ನು ಒಳಗೊಂಡಿರತಕ್ಕದ್ದು.

1. ಅಕಾಡೆಮಿಯ ಉದ್ದೇಶಗಳ ಅನುಷ್ಠಾನ ಮತ್ತು ವಿಸ್ತರಣೆಗಾಗಿ ಕರ್ನಾಟಕ ಸರ್ಕಾರ, ಭಾರತ ಸರ್ಕಾರ, ಕೇಂದ್ರ ಅಕಾಡೆಮಿಗಳು ನವದೆಹಲಿ ಇವುಗಳಿಂದ ಬಂದ ಅನುದಾನಗಳು, ಕೊಡುಗೆಗಳು, ವಂತಿಕೆಗಳು, ದಾನಗಳು, ಮುಂಗಡಗಳು ಮತ್ತು ಸಾಲಗಳು.

2. ಅಕಾಡೆಮಿಯ ಪ್ರಕಟಣೆಗಳ ಹಾಗೂ ಕಲಾಕೃತಿಗಳ ಮಾರಾಟದಿಂದ ಬಂದ ಜಮೆಗಳು: ಮತ್ತು ಅಕಾಡೆಮಿಯ ಇತರ ಯಾವುದೇ ರೀತಿಯಲ್ಲಿ ಸ್ವೀಕರಿಸಿದ ಎಲ್ಲಾ ಇತರ ಹಣ.

ಆ. ಅಕಾಡೆಮಿ ರಿಜಿಸ್ಟ್ರಾರ್ ಮತ್ತು ಅರ್ಥ ಸದಸ್ಯರು ಜಂಟಿಯಾಗಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಖಾತೆ ತೆಗೆದು ನಿರ್ವಹಿಸಬೇಕು.

ಇ. ಅಕಾಡೆಮಿಯಿಂದ ಅಥವಾ ಅಕಾಡೆಮಿಯ ಪರವಾಗಿ ಸ್ವೀಕರಿಸಲಾದ ಎಲ್ಲಾ ಹಣವನ್ನು ಅಕಾಡೆಮಿಯ ಕೇಂದ್ರ ಸ್ಥಾನದಲ್ಲಿರುವ ಯಾವುದೇ ಅನುಸೂಚಿತ ಬ್ಯಾಂಕ್‌ನಲ್ಲಿ ಮಾತ್ರ ಅಕಾಡೆಮಿಯ ಹೆಸರಿನಲ್ಲಿ ಇಡತಕ್ಕದ್ದು. ಅಕಾಡೆಮಿ ಅಥವಾ ಸ್ಥಾಯೀ ಸಮಿತಿ ಅಥವಾ ಅಧ್ಯಕ್ಷರಿಂದ ಅನುಮೋದಿತವಾದ ಒಂದು ನಿರ್ದಿಷ್ಠ ಉದ್ದೇಶಕ್ಕಾಗಿ ಅರ್ಥ ಸದಸ್ಯರಿಂದ ಮತ್ತು ರಿಜಿಸ್ಟ್ರಾರ್‌ರಿಂದ ರುಜು ಹಾಕಿದ ಚೆಕ್‌ನ ಹೊರತಾದ ಹಣವನ್ನು ಡ್ರಾ ಮಾಡತಕ್ಕುದ್ದಲ್ಲ. ಹಾಗಿದ್ದರೂ ಆ ಅಧಿಕಾರಿಗಳ ಪೈಕಿ ಯಾರಾದರೂ ಜರೂರು ಸಂದರ್ಭದಲ್ಲಿ ಒಂದು ನಿರ್ದಿಷ್ಟ ಕಾರ್ಯಕ್ರಮಕ್ಕೆ 1000-00 ರೂಪಾಯಿಗೆ ಮೀರದಷ್ಟು ಹಣವನ್ನು ಚೆಕ್‌ನ ಮೂಲಕ ಪಡೆಯಬಹುದು. ಆದರೆ ಹಾಗೆ ಮಾಡಿದ ವೆಚ್ಚದ ಬಗ್ಗೆ ಅನುಮೋದನೆಯನ್ನು ಆ ತರುವಾಯ ಕೂಡಲೆ ಸ್ಥಾಯೀ ಸಮಿತಿಯಿಂದ ಪಡೆಯತಕ್ಕದ್ದು ಮತ್ತು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕುದ್ದು.

ಈ. ಅಕಾಡೆಮಿಗೆ ಸರ್ಕಾರದಿಂದ ಬರುವ ಅನುದಾನದ ಜೊತೆಗೆ ಬೇರೆ ಮೂಲಗಳಿಂದ ಬರುವ ದಾನ, ಕೊಡುಗೆ, ವಂತಿಗೆ ಮತ್ತು ಪುಸ್ತಕ ಹಾಗೂ ಕಲಾಕೃತಿಗಳ ಮಾರಾಟದಿಂದ ಬರುವ ಎಲ್ಲಾ ಹಣವನ್ನು ಅಕಾಡೆಮಿಯ ಖಾತೆಗೆ ಜಮಾ ಮಾಡಬೇಕು ಮತ್ತು ಅಕಾಡೆಮಿಯ ಎಲ್ಲಾ ಜಮಾ ಖರ್ಚುಗಳನ್ನು ಒಂದೇ ರಿಜಿಸ್ಟ್ರಾರ್‌ನಲ್ಲಿ ನಿರ್ವಹಿಸಬೇಕು.

ಉ. ಅಕಾಡೆಮಿಯ ಹೆಸರಿನಲ್ಲಿರುವ ಎಲ್ಲ ಹಣವನ್ನು ಅಕಾಡೆಮಿಗೆ ಅನ್ವಯಿಸತಕ್ಕ ನಿಯಮಗಳ ಪ್ರಕಾರ ಮತ್ತು ಸಂದರ್ಭಾನುಸಾರ ಅಕಾಡೆಮಿಯ ಅಥವಾ ಸ್ಥಾಯೀ ಸಮಿತಿಯ ನಿರ್ಣಯಗಳ ಪ್ರಕಾರ ಅಕಾಡೆಮಿಯ ಯಾವುದೇ ಉದ್ದೇಶಗಳಿಗಾಗಿ ವೆಚ್ಚ ಮಾಡತಕ್ಕದ್ದು. ಈ ವೆಚ್ಚಗಳು ಕರ್ನಾಟಕ ಸರ್ಕಾರದ ಆರ್ಥಿಕ ಸಂಹಿತೆ, ಖಜಾನೆ ಸಂಹಿತೆ ಮತ್ತು ಸಾದಿಲ್ವಾರು ನಿಯಮಗಳಿಗೆ ಒಳಪಟ್ಟಿರಬೇಕು.

ಊ. ಅಕಾಡೆಮಿಯ ಅಧಿಕಾರೇತರ ಸದಸ್ಯರು ಮಾತ್ರ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ 'ಎ' ಪಟ್ಟಿಯಲ್ಲಿರುವ ಗ್ರಾಹ್ಯ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅವರು ಅಕಾಡೆಮಿಯ ಮತ್ತು ಯಾವುದೇ ಸಮಿತಿಗಳ ಸಭೆಗಳಿಗೆ ಹಾಜರಾದಲ್ಲಿ ಪ್ರತಿದಿನಕ್ಕೆ ಸಭಾಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಕಾಡೆಮಿಯ ಅಧ್ಯಕ್ಷರು, ರಿಜಿಸ್ಟ್ರಾರ್, ಸರ್ಕಾರಿ ಸದಸ್ಯರು ಹಾಗೂ ಅರ್ಥ ಸದಸ್ಯರು ಸಭಾ ಭತ್ಯೆ ಪಡೆಯಲು ಅರ್ಹರಾಗಿರುವುದಿಲ್ಲ.

ಋ. ಅಕಾಡೆಮಿಯ ಲೆಕ್ಕ ಪತ್ರಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆ: ಅಕೌಂಟೆಂಟ್ ಜನರಲ್‌ರವರು ಪ್ರತಿವರ್ಷ ಪರಿಶೋಧಿಸತಕ್ಕದ್ದು.

8. ಸರ್ಕಾರಿ ನೌಕರರಿಗೆ ಮತ್ತು ಕಛೇರಿಗಳಿಗೆ ಅನ್ವಯಿಸತಕ್ಕ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳು, ಕರ್ನಾಟಕ ಆರ್ಥಿಕ ಸಂಹಿತೆಯ, ಕರ್ನಾಟಕ ಖಜಾನೆ ಸಂಹಿತೆಯ ಮತ್ತು ಇತರ ನಿಯಮಗಳು ಅಕಾಡೆಮಿಯ ಉದ್ಯೋಗಿಗಳಿಗೂ ಅನ್ವಯಿಸತಕ್ಕದ್ದು.

9. ಅಕಾಡೆಮಿಯು ಗೊತ್ತುಪಡಿಸಬಹುದಾದ ಇತರ ವರದಿಗಳನ್ನಲ್ಲದೆ ಅಕಾಡೆಮಿಯ ಕಾರ್ಯಚಟುವಟಿಕೆಗಳು ಹಾಗೂ ವೆಚ್ಚ ವಿವರಗಳ ಬಗ್ಗೆ ಸರ್ಕಾರಕ್ಕೆ ವಾರ್ಷಿಕ ವರದಿಯನ್ನು ಸಲ್ಲಿಸತಕ್ಕದ್ದು.

10. ರಾಜ್ಯ ಸರ್ಕಾರವು ತನ್ನ ಕಾರ್ಯನೀತಿ, ಹಣಕಾಸು ಮತ್ತು ಸಾರ್ವಜನಿಕ ಮಹತ್ವವುಳ್ಳ ವಿಷಯಗಳ ಮೇಲೆ ತಾನು ಅವಶ್ಯವೆಂದು ಭಾವಿಸುವಂಥ ಸೂಚನೆಗಳನ್ನು ಅಕಾಡೆಮಿಗಳಿಗೆ ನೀಡಬಹುದು. ಅಕಾಡೆಮಿಯು ಅಂಥ ಸೂಚನೆಗಳನ್ನು ಪಾಲಿಸತಕ್ಕದ್ದು ಮತ್ತು ಅವಶ್ಯವೆಂದು ಭಾವಿಸುವಂಥ ವರದಿಗಳನ್ನು ಮತ್ತು ಇತರ ಮಾಹಿತಿಯನ್ನು ಒದಗಿಸತಕ್ಕದ್ದು.

ಎನ್. ಎಲ್. ಹೊಟಕರ

ಪಿ. ಆರ್. 1544

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.